# ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 335 (351) |
| ಸದಸ್ಯರ ಹೆಸರು | ಶ್ರೀ. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ವಿಷಯ | ರೈತರ ಕುಟುಂಬದ ಹಿತಾಶಕ್ತಿ ಕುರಿತು |
| ಉತ್ತರಿಸಬೇಕಾದ ದಿನಾಂಕ | 18/02/2022 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| ಪ್ರಶ್ನೆ | ಉತ್ತರ |
| ಅ) ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳ ಹಿತಾಶಕ್ತಿ ಕಾಪಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಸಾಲ ಬಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತ ಕುಟುಂಬಕ್ಕೆ ಸರ್ಕಾರದಿಂದ ಈ ಕೆಳಕಂಡ ಸೌಲಭ್ಯ ಒದಗಿಸುತ್ತಿದೆ.<br>1. ರೂ.5,00,000/-ಗಳ ಪರಿಹಾರವನ್ನು ನೀಡಲಾಗುತ್ತಿದೆ<br>2. ಸಾಮಾಜಿಕ ಭದ್ರತಾ ಪಿಂಚಣಿ ಯೋಜನೆಯಡಿ ಮೃತ ರೈತರ ಪತ್ನಿಗೆ ಮಾಸಿಕ ರೂ.2000/-ಗಳ ಪಿಂಚಣಿ ನೀಡಲಾಗುತ್ತಿದೆ.<br>3. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಆರೋಗ್ಯ ಕಾರ್ಡ್ ನೀಡಲಾಗುತ್ತಿದೆ.<br>4. ಆತ್ಮಹತ್ಯೆ ಮಾಡಿಕೊಂಡ ರೈತರ ಮಕ್ಕಳಿಗೆ ಸ್ನಾತಕೋತ್ತರ ಪದವಿಯ ಹಂತದವರೆಗೆ ಶಿಕ್ಷಣವನ್ನು ಮುಂದುವರಿಸಲು ಅನುವಾಗುವಂತೆ ಉಚಿತ ಶಿಕ್ಷಣ, ಹಾಸ್ಟೆಲ್ ಸೌಲಭ್ಯ ಅಥವಾ ತತ್ಸಮಾನ ಶಿಕ್ಷಣ ಮತ್ತು ವಸತಿ ವೆಚ್ಚದ ಮರುಪಾವತಿ ಮಾಡುವಂತೆ ಅನುಕೂಲ ಕಲ್ಪಿಸಲಾಗಿದೆ. |
| ಆ) ಕಳೆದ 3 ವರ್ಷಗಳಲ್ಲಿ ಆರ್ಥಿಕ ಸಂಕಷ್ಟದ ಕಾರಣಕ್ಕಾಗಿ ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ ನೀಡಿದ ಪರಿಹಾರದ ಮೊತ್ತವೆಷ್ಟು; (ಜಿಲ್ಲಾವಾರು ಹೆಸರಿನೊಂದಿಗೆ ಮಾಹಿತಿ ನೀಡುವುದು) | ಕಳೆದ 3 ವರ್ಷಗಳಲ್ಲಿ ಆರ್ಥಿಕ ಸಂಕಷ್ಟದ ಕಾರಣಕ್ಕಾಗಿ ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ ನೀಡಲಾದ ಪರಿಹಾರದ ಮಾಹಿತಿ ಕೆಳಕಂಡಂತಿದೆ.<br>ವರ್ಷ / ಆತ್ಮಹತ್ಯೆ ಪ್ರಕರಣಗಳು / ಪರಿಹಾರ ಮೊತ್ತ (ಲಕ್ಷಗಳಲ್ಲಿ)<br>2018-19 / 868 / 434.00<br>2019-20 / 884 / 442.00<br>2020-21 / 635 / 317.50<br>ಪರಿಹಾರ ನೀಡಲಾದ ಪ್ರಕರಣವಾರು/ ಜಿಲ್ಲಾವಾರು ಮಾಹಿತಿಯನ್ನು ಸಿ.ಡಿಯಲ್ಲಿ ನೀಡಲಾಗಿದೆ. |
| ಇ) ಮೃತ ರೈತರ ಪತ್ನಿಗೆ ನೀಡುವ ರೂ.2000/- ವಿಧಾವ ಮಾಶಾಸನವನ್ನು ಕನಿಷ್ಠ ರೂ.10000/- ಗಳಿಗೆ ಹೆಚ್ಚಿಸಲು ಸರ್ಕಾರ ಕೈಗೊಂಡ ಕ್ರಮಗಳೇನು. | ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಸಮಿತಿಯಲ್ಲಿ ಪರಿಶೀಲಿಸಿ, ಅನುಮೋದನೆಗೊಂಡ ಪ್ರಕರಣಗಳಲ್ಲಿ ಮೃತ ರೈತರ ಪತ್ನಿಗೆ ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದಿಂದ ಮಾಸಿಕ ರೂ. 2000/- ಗಳ ಪಿಂಚಣಿಯನ್ನು ನೀಡಲಾಗುತ್ತಿದೆ.<br>ಈ ಪಿಂಚಣಿ ಮೊತ್ತವನ್ನು ರೂ.10000/- ಗಳಿಗೆ ಹೆಚ್ಚಿಸುವ ಕುರಿತು ಸರ್ಕಾರದ ಮಟ್ಟದಲ್ಲಿ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

| | |
|---|---|
| ಈ) ಮೃತ ರೈತರ ಮಕ್ಕಳಿಗೆ ಸಂಪೂರ್ಣ ಉಚಿತ ವಿದ್ಯಾಭ್ಯಾಸ ನೀಡುವಲ್ಲಿ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ? (ವಿವರ ನೀಡುವುದು) | ಆತ್ಮಹತ್ಯೆ ಮಾಡಿಕೊಂಡ ರೈತರ ಮಕ್ಕಳಿಗೆ ಸ್ನಾತಕೋತ್ತರ ಪದವಿಯ ಹಂತದವರೆಗೆ ಶಿಕ್ಷಣವನ್ನು ಮುಂದುವರಿಸಲು ಅನುವಾಗುವಂತೆ ಉಚಿತ ಶಿಕ್ಷಣ, ಹಾಸ್ಟೆಲ್ ಸೌಲಭ್ಯ ಅಥವಾ ತತ್ಸಮಾನ ಶಿಕ್ಷಣ ಮತ್ತು ವಸತಿ ವೆಚ್ಚದ ಮರುಪಾವತಿ ಮಾಡುವಂತೆ ಅನುಕೂಲ ಕಲ್ಪಿಸಲಾಗಿದೆ. |

**ಕಡತ ಸಂಖ್ಯೆ:DSSP-LALC0LCQ/5/2022**

(ಆರ್.ಅಶೋಕ)
ಕಂದಾಯ ಸಚಿವರು